ಒಂದಾಣೆ ಮಾಲೆ 192

# ಗೋಪಾಲನ ಸ್ವಾಮ್ಯ

(ಸಾಮಾಜಿಕ ಏಕಾಂಕ ಪ್ರಹಸನ)



ರಚಯಿತರು:
ಶ್ರೀ। ಪಡಾರು ಮಹಾಬಲೇಶ್ವರ ಭಟ್ಟ.



1958

ಬೆಲೆ: ~~ಒಂದಾಣೆ~~. 2—

ಒಂದಾಣೆ ಮಾಲೆ, ಮಂಗಳೂರು.

## ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯುಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1958ನೇ ಜೂನ್ ತಿಂಗಳ ಮೂರನೆಯ ವಾರದ ವರೆಗೆ 192 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

192 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 3966 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಗೋಪಾಲನ ಸ್ವಾಮ್ಯ

## (ಸಾಮಾಜಿಕ ಏಕಾಂಕ ನಾಟಕ)

........

### ಪಾತ್ರಗಳು:

ವೆಂಕಟ್ರಮಣಯ್ಯ ....೬೦ ವರ್ಷದ ಹಳೇ ಮನುಷ್ಯ.
ಲಕ್ಷ್ಮಮ್ಮ ....ವೆಂಕಟ್ರಮಣಯ್ಯನವರ ಹೆಂಡತಿ;
ವಯಸ್ಸು ಸುಮಾರು ೫೦.
ಗೋಪಾಲ ....ಹಿರೇ ಮಗ; ೨೨ ವರ್ಷ.
ಶಿವ ....ಕಿರಿ ಮಗ; ೧೫ ವರ್ಷ.
ಶಂಕರರಾಯರು ....ವಕೀಲರು; ೫೦ ವರ್ಷ.
ಲಲಿತ ....ವಕೀಲರ ಮಗಳು; ೧೮ ವರ್ಷ.

### ದೃಶ್ಯ ೧

(ವೆಂಕಟ್ರಮಣಯ್ಯನವರ ಹಳೇ ಮನೆ; ಎದುರು ಅಂಚಂಚು ಗದ್ದೆಗಳು; ಬದಿಯಲ್ಲಿ ಅಡಕೆಮರದ ತೋಟ, ಹಿಂದೆ ಎತ್ತರದ ಗುಡ್ಡೆಕಾಡು. ಮಧ್ಯಾಹ್ನದ ಉರಿಬಿಸಿಲಿಗೆ ವೆಂಕಟ್ರಮಣಯ್ಯನವರ ಕಿರಿ ಮಗ ಶಿವನು ಹೊರಗಿನಿಂದ ಬರುತ್ತಾನೆ. ಕೈಯಲ್ಲಿ ಒಂದು ಟಪ್ಪಾಲು ಲಕ್ಕೋಟೆಯನ್ನು ಹಿಡಿದುಕೊಂಡಿದ್ದಾನೆ.)

ಶಿವ: (ಅತ್ತಿತ್ತ ನೋಡಿ) ಅಬ್ಬಬ್ಬ! ಅಪ್ಪನಿನ್ನೂ ಊಟವಾಗಿ ಬಂದಿಲ್ಲ; (ಕಿಸೆಯಿಂದ ಬೀಡಿಕಟ್ಟು, ಬೆಂಕಿಪೆಟ್ಟಿಗೆ ತೆಗೆದು ನೋಡುತ್ತಾ) ಹೂಂ, ಇನ್ನೂ ತಡವಿರಬೇಕು. ಹೇಗೂ ಒಂದು 'ದಂ' ಎಳೆಯಬಹುದು. (ಬೀಡಿಯೊಂದನ್ನು ತುಟಿಗೇರಿಸಿ, ಕಡ್ಡಿ ಒರೆದು ಹಚ್ಚುವನು— ಫೂ....ಎಂದು ಹೊಗೆ ಬಿಟ್ಟು, ಲಕ್ಕೋಟೆಯನ್ನು ನೋಡುತ್ತಾ) ಅಣ್ಣನ ಕಾಗದ, ಹೌದು ಅಣ್ಣನ ಕಾಗದ! ಏನು ಬರೆದಿದ್ದಾನೋ! ಇನ್ನು ಅಪ್ಪನ ಬೊಬ್ಬೆ ಇದೆಯಷ್ಟೆ!.... (ಡರ್‍ರೆಂದು ತೇಗುತ್ತಾ ವೆಂಕಟ್ರಮಣಯ್ಯನವರು ಚಾವಡಿಗೆ ಬರುವರು. ಶಿವ ಅವಸರ ಅವಸರವಾಗಿ ಬೀಡಿಯನ್ನು ಸೇದಿ, ಬೆಂಕಿಯನ್ನು ನೊಂದಿಸುವನು.)

ವೆಂಕಟ್ರಮಣಯ್ಯ: ಸೂ........ಹರ ಹರ (ಮಣ್ಣ ಚಿಟ್ಟಿಯ ಮೇಲೆ ಚಾಪೆ ಹರಡಿ) ಶಿವ, ಏ ಶಿವ! ನೋಡಾ, ಒಂದು ದಿಂಬು ತಾ ಇಲ್ಲಿ—ಮತ್ತೆ ಆ ಎಲೆ ತಟ್ಟೆ ಕೂಡಾ. (ವೆಂಕಟ್ರಮಣಯ್ಯ ಶಿವ ಶಿವ ಎನ್ನುತ್ತಾ ಕುಳಿತು ಕೊಳ್ಳುವರು. ಶಿವನು, ಓಡಿ ತಂದು ಕೊಡುತ್ತಾನೆ. ಅವರು ದಿಂಬನ್ನೆ ಳೆದುಕೊಂಡು, ತಟ್ಟೆಗೆ ಕೈ ಹಾಕುವರು.) ಶಿವ, ಶಿವ!....ಏನೋ ಅದು ಬೀಡಿ ವಾಸನೆ. ಯಾರು ಬಂದರೋ ಇಲ್ಲಿಗೆ?

ಶಿವ: ಯಾ....ಯ್ಯಾ....ಯ....ಅಣ್ಣನ ಕಾಗದ ಬಂದಿದೆ. ಅಪ್ಪ.

ವೆಂಕ: ಅಣ್ಣನ ಕಾಗದ, ಸುಟ್ಟ ಕಾಗದ ಅಲ್ಲ ಕೇಳಿದ್ದು ನಾನು; ಬೀಡಿ ಸೇದಿದ್ದೀಯೋ ಅಂತ. ನೋಡೋಣ ನಿನ್ನ ಜೇಬು. (ಹತ್ತಿರಕ್ಕೆ ಎಳೆದು, ಜೇಬಿನಿಂದ ಹೊರಕ್ಕೆ ತೆಗೆದು) ಕೆಟ್ಟ ಹುಡುಗ, ಎಲ್ಲಿಂದಲೋ ಇದು? ದುಡ್ಡೆಲ್ಲಿಂದಲೋ ಇದಕ್ಕೆ? (ದೂರಕ್ಕೆಸೆಯುವರು.)

ಶಿವ: ಹಲ್ಲು, ಹಲ್ಲ ಸಿ ಸ್ಸಿಡಿಯುವುದಕ್ಕೆ ಡಾಡಾಕ್ರ........

ವೆಂಕ: ಸಾಕು ಸಾಕು. ಮಂಗ! ಮನೆ ತೆಗೆಯಲಿಕ್ಕೆ ಮಕ್ಕಳು ಎರಡು ಹುಟ್ಟಿದ್ದಾವೆ. ಒಂದು ಹೇಳದೆ, ಕೇಳದೆ ಹೋಗಿದೆ ಇಂಗ್ಲೀಷು—ಕರ್ಮಠ ಇಂಗ್ಲೀಷು ಅಂತ ಪೇಟೆಗೆ. ಮನೆಗೆ ಮುಖ ತೋರಿಸದೆ ನಾಲ್ಕು ವರ್ಷವಾಯಿತು. ಇದಾದರೂ ಒಂದು ಇದೆ ಎಂದುಕೊಂಡು ಮನೆಯಲ್ಲೇ ಇಟ್ಟುಕೊಂಡರೆ, ಇಲ್ಲದ ದುರ್ಬುದ್ಧಿ. ಸತ್ಯ ಹೇಳು; ದುಡ್ಡೆಲ್ಲಿಂದ? ಎಲ್ಲಿಂದ ಕದ್ದೆ ಹೇಳೋ ನಾಯಿ!

ಶಿವ: ನಾ....ನ್ನಾಲ್ಕು ಅಡಿಕೆ ಕೊಕ್ಕೊಟ್ಟು ಅಂಗಡಿಯಿಂದ ತಂದೆ....

ವೆಂಕ: ಊಹೂಂ! ಟಪ್ಪಾಲಿಗೆ ಹೋಗುತ್ತೇನೆ ಅಂತ ಅಂಗಡಿಯ ಹತ್ತಿರ ಹೋಗಿ ಮಾಡುವ ಕೆಲಸ ಇದು. ದರಿದ್ರ! ಬಾರೋ, ಇಲ್ಲಿ! (ತಲೆಗೆ ಕುಟ್ಟಿಕೊಟ್ಟು) ಸಾಕೊ ಏನು, ಸಾಕೊ ಕೆಟ್ಟವನೆ! ಇನ್ನು, ಇನ್ನು ಮೇಲೆ (ಶಿವ ಕೂಗುವಾಗ....)

ಲಕ್ಷ್ಮಮ್ಮ: (ಪ್ರವೇಶಿಸಿ) ಅಯ್ಯೊ, ಕೊಲ್ಲುತ್ತೀರೋ ಏನು ಅವನನ್ನು? ಮಕ್ಕಳೆಂದರೆ ಹಾವಿಗಿಂತ ಕಡೆ. ಕಾಣುವುದಿಲ್ಲವೇ ದೊಡ್ಡವನನ್ನು ಮಗನೇ ಅಲ್ಲ ಎನ್ನುವುದು? ಮತ್ತೆ ಇವನೊಬ್ಬ ಇದ್ದಾನೆ........

ವೆಂಕ: ನೀನೊಮ್ಮೆ ಒಳಗೆ ಹೋಗು ಬೇಗ. ಮಕ್ಕಳು ಮಕ್ಕಳು ಅಂತ ಪಾಶ ಕಟ್ಟಿಕೊಂಡು ಸಾಯಿ! ಇಲ್ಲ. ನನಗೆ ಇಬ್ಬರ ಆಶೆಯೂ ಇಲ್ಲ. ಅದು ಹಾಗೆ—ಇದು ಹೀಗೆ.

ಲಕ್ಷ್ಮಮ್ಮ: ಹಾಗೆಲ್ಲ ಹೇಳಲಿಕ್ಕೆ ಈಗೇನಾಗಿದೆ? ಪಾಪ, ಆ ಗೋಪಾಲ ಒಂದೂ ರಗಳೆ ಬೇಡಾ ಅಂತ ಹೇಳದೆ ದೂರ ಹೋಗಿಯೇ ಬಿಟ್ಟ.

ವೆಂಕ: ಈ ಅಪ್ಪನೊಬ್ಬ ಇದ್ದಾನೋ ಸತ್ತಿದ್ದಾನೋ ಅಂತ ಕೂಡಾ ಅವನಿಗೆ ಬೇಡ.

ಲಕ್ಷ್ಮಮ್ಮ: ಎಷ್ಟಾದರೂ ಸಣ್ಣವನಲ್ಲವೇ? ಓದುತ್ತಾನಂತೆ. ಹೀಗೆ ಕಲಿತು ದೊಡ್ಡ ಕೆಲಸ ಸಿಕ್ಕಿದರೆ ಒಳ್ಳೆಯದಲ್ಲವೇ!

ವೆಂಕ: ಎಲ್ಲ ಗೊತ್ತಿದೆ, ಅವನು ಮಾಡುವ ಭಾಗ್ಯ! ಅವನು ಬರೆಯುವ ಕಾಗದ ನೋಡಿದರೆ ಸಾಕಲ್ಲ! ಹುಟ್ಟಿಸಿದ ತಂದೆ-ತಾಯಿ, ಒಂದರ ಗ್ರಹಿಕೆಯೂ ಇಲ್ಲ. ಇಂದೊಂದು ಕಾಗದ ಬಂದಿದೆ. ಅಷ್ಟು ರೂಪಾಯಿ ಇಷ್ಟು ಅಂತ ಇಲ್ಲೇನು ಹುಗಿದಿಟ್ಟದ್ದಿದೆಯೋ!

ಲಕ್ಷ್ಮಮ್ಮ: ಪಾಪ, ಉಣ್ಣಬೇಡವೇ?

ವೆಂಕ: ಅದಕ್ಕೆ "ಇಲ್ಲಿಗೇ ಬಂದುಬಿಡು" ಅಂದದ್ದು. ಇಲ್ಲೇನು ಹೊತ್ತಿ ಹೋಗಿಲ್ಲ. ಬರೆದ ಉದ್ದದ ಕಾಗದ,"ನಿಮ್ಮ ಆ ಬುದ್ಧಿವಾದ ನನಗೆ ಬೇಕಿಲ್ಲ. ನನ್ನ ದಾರಿ ನಾನೇ ನೋಡುತ್ತೇನೆ. ನನ್ನ ಪಾಲಿನ ಆಸ್ತಿಯನ್ನು ಕೊಟ್ಟುಬಿಡಿ"— ಇನ್ನೇನು ಬೇಕು ಮರ್ಯಾದೆ ನನಗೆ? ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೇ ಹೀಗಾದರೆ?

ಲಕ್ಷ್ಮಮ್ಮ: ಏನೋ ತಿಳಿಯದೆ ತಪ್ಪು ಬರೆದಾ ಅಂತ ಹಾಗೆಲ್ಲ ಘಾತಿಗೆ ತೆಗೆದುಕೊಳ್ಳಬೇಕೆ? ಸ್ವಲ್ಪ, ನೀವೂ ಮಾಡುವುದೂ ಹಾಗೆಯೇ— ಅಲ್ಲ, ಮಂಗ್ಳೂರಿನ ಪೇಟೆ ಅಂದರೆ ಗೊತ್ತಿದೆ. ತಿಂಗಳಿಗೆ ಬರೇ ಇಪ್ಪತ್ತೈದು ರೂಪಾಯಿ ಕಳಿಸಿದರೆ ಸಾಕಾದೀತೇ? ಈಗ ಅದಕ್ಕೂ ನಾಸ್ತಿ....

ವೆಂಕ: ವಿದ್ಯೆ ಬೇಡ ಬೇಡ ಈ ಬ್ರಾಹ್ಮಣರಿಗೆ ಅನ್ನುವುದು ಮತ್ತೆ ಯಾಕೆ ಅಂತ ಗ್ರಹಿಸಿದ್ದಿ? ಹಾಕಿದ ಹಣ ನೀರಿಗೇ. ಬಡ್ಡಿ ಬಡ್ಡಿ ಕೂಡಾ ಸಿಕ್ಕಲಿಕ್ಕಿಲ್ಲ; ಮತ್ತೆ ನಿನ್ನ ಮಗ ಇಂಗ್ಲೀಸು ಕಲಿತು ಭಾಗ್ಯ ಮಾಡುವುದು ಅಷ್ಟರಲ್ಲೇ ಇದೆ. ಇಲ್ಲಿಗೆ ಬಂದರೆ ಅಕ್ಕಚ್ಚಿಗೆ ನೀರು ಆದರೂ ಹಾಕ ಬಹುದು........

ಲಕ್ಷ್ಮಮ್ಮ: ನಿಮ್ಮದೊಂದೇ ಮಾತು. ಅವನಿಗೆ ಪಾಪ, ಕಲಿಯುವ ಆಶೆ. ಹ್ಞೊ! ಶಿವ, ನಿನ್ನ ಅಣ್ಣನ ಕಾಗದ ಇದೆಯಂತೆ. ಏನು ವಿಶೇಷ?

ವೆಂಕ: (ಶಿವ ಮುಂದೆ ಬಂದಾಗ) ಹೂಂ, ಹೂಂ. ಏನೂ ಬೇಡ.

ನನ್ನ ಜೀವಶ್ರವ ಇನ್ನೊಮ್ಮೆ ಬೇಡ. (ಪತ್ರವನ್ನೆಳೆದು ಮುದ್ದೆಮಾಡಿ ಎಸೆಯುವರು.)

ಲಕ್ಷ್ಮಮ್ಮ: ದೇವರೇ, ಇಷ್ಟು ಹಗೆಯೇ ಇವರಿಗೆ? ನನ್ನ ಗ್ರಹಚಾರ. (ಪತ್ರವನ್ನೆತ್ತಿ) ಶಿವ, ನೀನಾದರೂ ಓದಿ ಹೇಳಪ್ಪ. ಏನು ವಿಶೇಷವಿದೆಯೊ!

ವೆಂಕ: ಏನೂ ಬೇಡ. ಇಲ್ಲಿ ಓದುವುದೇ ಬೇಡ. ಎಲ್ಲ ಆಚೆ, ಆಚೆ. ಕ ಹೂಂ, ಆ ಸುಟ್ಟ ಕಾಗದ ನನ್ನೆದುರು ಬೇಡ.

ಲಕ್ಷ್ಮಮ್ಮ: ಆಗಲಿ. ಬಾ ಶಿವ, ಇಲ್ಲಿ ಬಾ. ಓದಿ ಹೇಳು.

ಶಿವ: (ತುಸು ಮುಂದೆ ಬಂದು ಪತ್ರವನ್ನು ಬಿಡಿಸಿ ಓದುತ್ತಾನೆ.)

ಮಂಗಳೂರು,

೨೧—೧—೫೮.

ತೀ. ಸ. ತಂದೆಯವರಲ್ಲಿ ಬಿನ್ನಹ:—

ನಾನು ಈ ಮೊದಲು ಬರೆದ ಪತ್ರ ತಲಪಿರಬಹುದು. ನನಗೆ ವಿದ್ಯಾಭ್ಯಾಸದಲ್ಲಿ ಮುಂದುವರಿಯಬೇಕೆಂಬ ಆಶೆ. ಆದರೆ, ನೀವು ತುಂಬ ಅಡ್ಡಬಂದಿರಿ. ನಾನು ಮನೆಯಿಂದ ಹೇಳದೆಯೂ ಬಂದೆ. ಇದು ನನ್ನ ತಪ್ಪು. ಆದರೆ, ನೀವು ಸರಿಯಾಗಿ ಹಣ ಕೊಡದೆ ಕಷ್ಟ ಕೊಟ್ಟಿರಿ. ನಾನಂತೂ ವಿದ್ಯಾಭ್ಯಾಸವನ್ನು ನಿಲ್ಲಿಸುವುದಿಲ್ಲವೆಂದು ನಿಶ್ಚಯಿಸಿದ್ದೇನೆ. ಇನ್ನೂ ಒಂದೆರಡು ವರ್ಷ ಓದಲಿಕ್ಕಿದೆ. ಈಗಾಗಲೇ ಪರೀಕ್ಷೆ ಫೀಸು ಕಟ್ಟಬೇಕಿತ್ತು. ಅಂತೂ ಸಾಲವೇ ಗತಿ. ಈ ಸಾಲಕ್ಕೆ ನನ್ನ ಅಂಶದ ಆಸ್ತಿಯನ್ನು ಆಧರಿಸಿಕೊಂಡಿದ್ದೇನೆ........

ವೆಂಕ: (ಜಗ್ಗನೆದ್ದು) ಏನಂತೆ, ಏನಂತೆ, ಅಂಶದ ಆಸ್ತಿ? ಯಾರ ಅಂಶದ್ದಂತೆ? ಇಲ್ಲ, ಖಂಡಿತ ನನ್ನ ಆಸ್ತಿಯಲ್ಲಿ ಒಂದು ಚೂರು ಕೂಡ ಅವನಿಗೆ ಸಿಕ್ಕಲಿಕ್ಕಿಲ್ಲ! ಇಲ್ಲಿಗೇ ಮುಗಿಯಿತು. ಅವನು ನನ್ನ ಮಗನಲ್ಲ! ಅವನಿಗಿನ್ನು ಆಸ್ತಿಯ ಸ್ವಾಮ್ಯವಿಲ್ಲ. ತಿಲೋದಕ ಕೂಡ ಬಿಟ್ಟ ಹಾಗೆಯೇ!

ಲಕ್ಷ್ಮಮ್ಮ: ಏನಾಗಿದೆ ನಿಮಗೆ? ಹುಚ್ಚು ಹಿಡಿದಿದೆಯೇ? ನಿಮ್ಮ ಮಗನಲ್ಲವಾದರೆ ನನ್ನ ಮಗ! ದೇವರೇ, ನನ್ನ ಗೋಪಾಲನನ್ನು ಕಾಪಾಡಬೇಕು. (ಕಣ್ಣು ಜ್ಜಿಕೊಳ್ಳುವಳು.)

ವೆಂಕ: ನಡಿ, ನಡಿ ಇಲ್ಲಿಂದ! ಕೆಟ್ಟವಳು! (ಒಳಗೆ ದಬ್ಬಿ) ಅವನಿಗೆ ಇಷ್ಟು—ಇಷ್ಟು ಕೂಡಾ ಆಸ್ತಿಯಲ್ಲಿ ಹಕ್ಕಿಲ್ಲ. ಶಿವ, ಇಲ್ಲಿ ಬಾ. ನೋಡು, ಆ ಕೆಟ್ಟವನು ನನ್ನ ಮಗನೇ ಅಲ್ಲ. ನನ್ನ ಆಸ್ತಿಯನ್ನೆಲ್ಲಾ ನಿನ್ನ ಹೆಸರಿಗೆ

ಮಾಡುತ್ತೇನೆ. ದೇವರ ಹೆಸರಲ್ಲಿ ಮಾಡಿಟ್ಟು ಅದರ ಹಕ್ಕುದಾರನಾಗಿ ನಿನ್ನನ್ನು ಮಾಡುತ್ತೇನೆ. ಗೋಪಾಲನ ಸ್ವಾಮ್ಯ ಇನ್ನಿಲ್ಲ.

ಶಿವ: ಬೇಡಪ್ಪಾ, ಬೇಡ. ಅಣ್ಣ ಬೇಕು, ನನಗೆ ಅಣ್ಣ ಬೇಕು.

ವೆಂಕ: ಮುಚ್ಚು ಬಾಯಿ! ಜಾಗ್ರತೆ! ಎಲ್ಲ ನನಗೆ ಗೊತ್ತಿದೆ. ಅವನ ಘಟಶ್ರಾದ್ಧ ಮಾಡಿಯಾಯಿತು. ಹೂಂ! ಎಲ್ಲಿ ನೋಡು, ಆ ಗಾಡಿ ತಿಮ್ಮನನ್ನು ಇಲ್ಲಿ ಬರಲಿಕ್ಕೆ ಹೇಳು. ಗಾಡಿ ಕೂಡಿಯೇ ಬರಲಿ. ನನಗೆ ಈವೊತ್ತು ರಾತ್ರಿಯೇ ಮಂಗಳೂರಿಗೆ ಹೋಗಬೇಕು. ವಕೀಲರನ್ನು ಕಂಡು ಆಲೋಚನೆ ಕೇಳಬೇಕು. ಗೋಪಾಲನಿಗೆ ನನ್ನ ಆಸ್ತಿಯಲ್ಲಿ ಹಕ್ಕೇ ಇಲ್ಲದಂತೆ ರಿಕಾರ್ಡ್ ಗಿಕಾರ್ಡ್ ಎಲ್ಲ ಸರಿಮಾಡಿಡಬೇಕು. ಹೂಂ, ಹೋಗು ಬೇಗ. (ಶಿವನು ಕಣ್ಣುಜ್ಜಿಕೊಳ್ಳುತ್ತಾ ತೆರಳುವನು) ನೋಡಿಯೇ ಬಿಡಬೇಕು! ಮಗನಂತೆ! ಇಂಥಾ ಮಕ್ಕಳು ಇದ್ದರೇನು? ಇಲ್ಲದಿದ್ದರೇನು? ಅವನು ಈ ಅಪ್ಪನ ಮಗನೇ? (ಎಲೆ ತಟ್ಟೆಗೆ ಕೈಹಾಕುವರು. ತೆರೆ ಬೀಳುವುದು.)

## ದೃಶ್ಯ ೨

(ಮಂಗಳೂರು ಶಹರಿನ ನಡುವಣ ಬೀದಿಯ ಗದ್ದಲದಲ್ಲಿ ಶಿವನು ದಿಕ್ಕುಕೆಟ್ಟು ಅತ್ತಿತ್ತ ನೋಡುತ್ತಾನೆ.)

ಶಿವ: (ಸ್ವಗತಃ) ಹೇಗೂ ಮಂಗಳೂರಿಗೆ ಬಂದು ತಲಪಿದೆ. ಅಪ್ಪ ಗಡಾಗಡಾ ಅಂತ ನಾಳೆ ಬೆಳಗ್ಗೆ ಎಲ್ಲಿಯಾದರೂ ಬರುತ್ತಾರೋ ಏನೋ. ಆದಕ್ಕೆ ಮುಂಚೆಯೇ ನಾನು ಅಣ್ಣನನ್ನು ಕಂಡು ಇಲ್ಲಿಂದ ಹೊರಟರಾಯಿತು. ಆದರೆ, ಈಗ ಅಣ್ಣ ಇರುವುದೆಲ್ಲಿ? (ಅತ್ತಿತ್ತ ನೋಡಿ) ಕೂಲೀಜನ ಹತ್ತಿರ ಎಲ್ಯಾದರೂ ಸಿಕ್ಕಿಯಾನೇ? ಅಲ್ಲ, ಇನ್ನೆಲ್ಲಿ?.... ಹೋಗಲಿ. ಹೇಗೂ ಹುಡುಕಿ ಹಿಡಿಯಬಹುದು. ಈಗ....ಒಂದು ಸಿಗರೇಟು ಸೇದಿದರೇನಂತೆ? ಇಲ್ಲಂತೂ ಯಾರೂ ಇಲ್ಲ ಗುರುತಿನವರು. ಬೀಡಿ ಸೇದಿ ಸೇದಿ ಏನೂ ರುಚಿಯಿಲ್ಲ. (ಕಿಸೆಯಿಂದ ಸಿಗರೇಟು, ಬೆಂಕಿಪೆಟ್ಟಿಗೆ ತೆಗೆದು ಸೇದತೊಡಗುವನು.) ಆಹಾ, ಎಷ್ಟು ರುಚಿ ಸಿಗರೇಟಿಗೆ! ಎಂಥ ಹೊಗೆ! ಸುರುಳಿ ಸುರುಳಿಯಾಗಿ ಹೋಗುತ್ತದೆ. ಫೂ.... (ಅನಿರೀಕ್ಷಿತವಾಗಿ ಗೋಪಾಲನು ಪ್ರವೇಶಿಸುತ್ತಾನೆ.)

ಗೋಪಾಲ: ಯಾರು, ಶಿವ! ಶಿವಾ, ಯಾಕೆ ಬಂದೆಯೋ ಇಲ್ಲಿಗೆ? ಮನೆಯಲ್ಲೇನು?

ಶಿವ: (ಪೆಚ್ಚಾಗಿ, ಸಿಗರೇಟನ್ನು ಅಡಗಿಸಿ) ಅಣ್ಣಾ!

ಗೋಪಾಲ: ಹಾಗೇನಿಲ್ಲ ಶಿವ! ಸಿಗರೇಟೇ ಅದು? ನಾನೇನೂ ಬಯ್ಯುವುದಿಲ್ಲ; ಬಡಿಯುವುದಿಲ್ಲ. ಆದರೆ, ಶಿವ! ಬೀಡಿ, ಸಿಗರೇಟು, ಚುಟ್ಟ ಸೇದಿದರೆ ದೇಹಕ್ಕೆ ತುಂಬಾ ಹಾನಿ ಇದೆ. (ಶಿವ ಕೆಮ್ಮುತ್ತಾನೆ.) ಅಕೋ, ನಿನ್ನ ಶ್ವಾಸಕೋಶಗಳು ಈಗಲೇ ಎಚ್ಚರಿಕೆ ಕೊಡುತ್ತಿವೆ. ವಿಷದ ಹೊಗೆಯಿಂದಾಗಿ ಶ್ವಾಸಕೋಶಗಳು ಹಾಳಾಗಿ ಹೋಗುತ್ತವೆ. ಕ್ಷಯ, ಕೇನ್ಸರ್‌ಗಳಿಗೂ ಇದು ಒಯ್ಯುತ್ತದೆನ್ನುವರು. ನೋಡು ಶಿವ, ಇನ್ನು ಸೇದಬೇಡ! (ಬೆನ್ನು ತಟ್ಟುವನು.)

ಶಿವ: ಆಯಿತಣ್ಣಾ. ಇನ್ನು ಖಂಡಿತ ಸೇದುವುದಿಲ್ಲಣ್ಣ! (ಕಿಸೆಯಿಂದ ತೆಗೆದು ಎಸೆಯುವನು.)

ಗೋಪಾಲ: ನೀನು ಹುಶಾರು ನೋಡು. ಶಿವ, ಈಗ ನೀನೇಕೆ ಇಲ್ಲಿಗೆ ಬಂದೆ? ಹೇಗೆ ಬಂದೆ? ಮನೆಯಲ್ಲಿ ಏನಾಗಿದೆ?

ಶಿವ: ಅಣ್ಣ, ಅಣ್ಣ! ಅಪ್ಪ ನಿನ್ನ ಕಾಗದ ನೋಡಿ ತುಂಬಾ ಸಿಟ್ಟಾಗಿದ್ದಾರೆ. ಅವರ ಆಸ್ತಿಯಲ್ಲಿ ನಿನಗೆ ಹಕ್ಕೇ ಇಲ್ಲದಂತೆ ಮಾಡುತ್ತಾರಂತೆ ಅಣ್ಣ....ಹೌದಣ್ಣ. ಇಲ್ಲಿಗೆ ಗಾಡಿಯಲ್ಲಿ ಹೊರಟಿದ್ದಾರೆ,—ವಕೀಲರೊಡನೆ ಕೇಳಲಿಕ್ಕೆ.

ಗೋಪಾಲ: ಹೋಗಲಿ ಶಿವ. ಎಲ್ಲವನ್ನೂ ನೋಡಿಕೊಳ್ಳೋಣ. ಪಾಪ, ನೀನು ಇಷ್ಟು ಹೇಳಲಿಕ್ಕೆ ಇಲ್ಲಿಗೆ ಬಂದಿಯೋ? ತುಂಬಾ ಬಚ್ಚಿದ್ದಿ ಪಾಪ. ಬಾ, ಕಾಫಿ ಕುಡಿಯುವಾ. (ಮೆಲ್ಲನೆ ನಡೆಯುವರು.)

ಶಿವ: ಅಣ್ಣಾ, ಅಪ್ಪ ದಿನಾಲೂ ಬಡಿಯುತ್ತಾರಣ್ಣಾ, ಬೈಯುತ್ತಾರಣ್ಣ. ನಾನು ಅಲ್ಲಿ ಇರುವುದಿಲ್ಲ. ನಿನ್ನೊಟ್ಟಿಗೆ ಶಾಲೆಗೆ ಬರುತ್ತೇನಣ್ಣ. ಆಗದೇ?

ಗೋಪಾಲ: ಆಗಲಿ. ಎಲ್ಲ ಬರುವ ಜೂನಿಗೆ ನೋಡುವೆವಂತೆ. ಆಗ ಶಾಲೆ ಸುರುವಾಗುವ ಸಮಯ. ನೀನು ಖಂಡಿತ ಶಾಲೆಗೆ ಹೋಗಿ ಕಲಿಯಬೇಕು ಶಿವ.

ಶಿವ: ಆಯಿತಣ್ಣ, ಆಯಿತು. ಮಂಗಳೂರು ಎಷ್ಟು ಚಂದ. ನಾನು ಬಸ್ಸಿನಲ್ಲಿ ಬಂದೆಯಣ್ಣ. ಅಪ್ಪ ಗಾಡಿ ಹತ್ತಿದ ಕೂಡಲೇ ನಾನು ದೊಡ್ಡ ಮಾರ್ಗಕ್ಕೆ ನಡೆದುಕೊಂಡೇ ಬೇಗ ಬಂದೆಯಣ್ಣ. ಬಸ್ಸು ಅಲ್ಲಿಗೆ ಬಂತು. ಅಣ್ಣ, ನನಗೆ ಅಪ್ಪನು ಬರುವ ಮೊದಲೇ ಮನೆಗೆ ಹೋಗಬೇಕಣ್ಣ.

ಗೋಪಾಲ: ಶಿವ, ಎಲ್ಲ ಮಾಡೋಣ. ಈಗ ಒಂದಿಷ್ಟು ಕಾಫಿ ಕುಡಿಯುವ, ಬಾ. ರಾತ್ರಿ ನನ್ನ ಕೋಣೆಯಲ್ಲೇ ಇರು. ಬೆಳಗ್ಗೆ ಬಸ್ಸು ಹತ್ತಿಸಿಬಿಡುತ್ತೇನೆ. ಬಾ, ಹೊರಡು. (ತೆರೆ ಬೀಳುವುದು.)

## ದೃಶ್ಯ ೩

(ವಕೀಲ ಶಂಕರರಾಯರ ಮನೆ; ಅಲ್ಲಿ ಅವರ ಆಫೀಸು. ಮುಸ್ಸಂಜೆ, ಅವರ ಆಫೀಸಿನಲ್ಲಿ ಕುಳಿತು, ರಿಕಾರ್ಡುಗಳನ್ನು ತಿರುವುತ್ತಾ ಇರುವರು.)

ಗೋಪಾಲ: (ಪ್ರವೇಶಿಸಿ) ನಮಸ್ಕಾರ.

ಶಂಕರ: ಯಸ್, ನಮಸ್ಕಾರ (ತಲೆಯೆತ್ತಿ, ಮುಖ ನೋಡಿ) ಹೋ, ಬನ್ನಿ ಬನ್ನಿ.

ಗೋಪಾಲ: (ಮೇಜಿನ ಬಳಿ ನಿಂತು) ನಿಮ್ಮಲ್ಲಿ ಸ್ವಲ್ಪ ಕೆಲಸವಿತ್ತು, ಈಗ ಬಿಡುವಿದೆಯೋ?

ಶಂಕ: ಚೆನ್ನಾಯಿತು. ಏಕೆ ನಿಂತಿದ್ದೀರಿ? ಕುಳಿತುಕೊಳ್ಳಿ, ಕುಳಿತು ಕೊಳ್ಳಿ. (ಕುರ್ಚಿ ಎಳೆಯುವರು.)

ಗೋಪಾಲ: ಸರಿ. (ಕುಳಿತುಕೊಳ್ಳುವನು.)

ಶಂಕ: ನೀವು........ಸರಿಯಾದ ಪರಿಚಯವಿಲ್ಲ.

ಗೋಪಾಲ: ನಾನು ಇಲ್ಲೇ ಮಂಗಳೂರಲ್ಲಿ ಇರುವವ. ಪಿ. ವಿ. ಗೋಪಾಲ್ ಎಂದು ನನ್ನ ಹೆಸರು. B. A. ಓದುತ್ತಾ ಇದ್ದೇನೆ.

ಶಂಕ: ಓಹೋ, ಕಾಲೇಜು ಸ್ಟೂಡೆಂಟ್. ಅದೆಂಥ ಕೇಸ್ ನಿಮ್ಮದು ಗೋಪಾಲ್? ಹಾಗಲ್ಲವೇ ನಿಮ್ಮ ಹೆಸರು?

ಗೋಪಾಲ: ಹೌದು; ಪುತ್ತೂರಿನ ವೆಂಕಟ್ರಮಣಯ್ಯನವರ ಮಗ ನಾನು.

ಶಂಕರ: ಪುತ್ತೂರಿನ ವೆಂಕಟ್ರಮಣಯ್ಯನವರೇ? ನನ್ನ ಕ್ಲಯಂಟು, ಕಕ್ಷಿಗಾರ. ಸರಿ. ಮತ್ತೇನು? ಹೇಗಿದ್ದಾರೆ ವೆಂಕಟ್ರಮಣಯ್ಯನವರು? ಸದ್ಯ ಈ ಕಡೆ ಬಂದೇ ಇಲ್ಲವಲ್ಲ! ಹೇಗಿದೆ ಅವರ ಎತ್ತಿನ ಗಾಡಿ? ಸತ್ತರೂ ಬಿಡಲಿಕ್ಕಿಲ್ಲ ಅವರು ಎತ್ತಿನ ಗಾಡಿಯನ್ನು, ಅಂಥಾ ಜನ. ಒಳ್ಳೆ ಹೃದಯವಪ್ಪ!

ಗೋಪಾಲ: ಹಾಗಾದರೆ, ನಿಮ್ಮ ಕೂಡೆ ನಾನು ವಿಚಾರಿಸುವುದೇ ವ್ಯರ್ಥ!

ಶಂಕ: ಅದೇನು, ತಂದೆಮಕ್ಕಳಿಗೆ ಅಷ್ಟು ಸಮಾ ಅಂತ ಇಲ್ಲವೇ? ಸರಿ ಎನ್ನಿ. ಅಂಥ ಸಂದರ್ಭ ಬಂದರೆ ಹಾಗೆ ಆಗಿಯೇ ತೀರುತ್ತದೆ. ನೋಡಿ ಓ ಅತ್ತಲಾಗಿಯುವರು ಒಬ್ಬರು ತಂದೆ, ಅವರ ಮಗ, ಹತ್ತು ವರ್ಷಗಳಿಂದ ಕೋರ್ಟಿನಲ್ಲಿ ಬಿದ್ದಿರುತ್ತಾರೆ. ಒಮ್ಮೆ ತಂದೆಗೆ ಗುಣವಾದರೆ ಮಗನ ಅಪೀಲು. ಮಗನಿಗೆ ಗುಣವಾದರೆ ತಂದೆಯ ಆಪೀಲು. ಹಣ ಖರ್ಚಾಗುತ್ತದೆ. ಏನು ಮಾಡುವುದು? ನ್ಯಾಯ ತೀರ್ಮಾನವಾಗಬೇಕಲ್ಲ?

ಗೋಪಾಲ: ಅಂತೂ ನೀವು ತಂದೆಯವರ ವಕೀಲರಲ್ಲವೇ?

ಶಂಕ: ಅದು ಕೇಳುತ್ತೀರಾ ಗೋಪಾಲ್? ಅಂತರ್ಯದಲ್ಲಿ ವೆಂಕಟ್ರಮಣಯ್ಯನವರಿಗೆ ನನ್ನಲ್ಲಿ ಹಿತವಿಲ್ಲ. ಇದ ನನಗೆ ಗೊತ್ತಾಗಿದೆ. ನೋಡಿ, ಇತ್ತಿತ್ತಲಾಗೆ ಒಂದು ವ್ಯಾಜ್ಯಕ್ಕೆ ಅವರು ಇನ್ನೊಬ್ಬ ವಕೀಲರಲ್ಲಿಗೆ ಹೋಗಿದ್ದಾರೆ. ವಕಾಲತ್ತು ಕೊಟ್ಟಿದ್ದಾರೆ. ಅಲ್ಲ, ಕಮ್ಮಿಪಕ್ಷ ಅವರ ಐವತ್ತು ವ್ಯಾಜ್ಯ ನಾನೇ ಗುಣಮಾಡಿಕೊಟ್ಟಿದ್ದೇನೆ. ಈಗ ಮಾತ್ರ ಸರಿಯಿಲ್ಲ. ಏನು ಮಾಡಲಿ? ಹೇಗೂ ನಿಮ್ಮ ಕೇಸನ್ನೂ ನಾನೇ ಪ್ರಯತ್ನಿಸುತ್ತೇನೆ. ನೋಡಬೇಕು ಒಂದು ಕೈ. ಕೇಸ್ ತೆಕ್ಕೊಳ್ಳೋಣ. ಏನೂ ಅಡ್ಡಿಯಿಲ್ಲ.

ಗೋಪಾಲ: ಈಗ ನಿಮಗೆ ಬಿಡುವಿದೆಯೇ?

ಶಂಕ: ಬಿಡುವಿಲ್ಲದೇ ಏನು? ಮತ್ತೆ ನಮ್ಮ ಈ ವಕೀಲ ವೃತ್ತಿಯೇ ಹಾಗೆ. ಆ ಹೊತ್ತು ಈ ಹೊತ್ತು ಒಂದೂ ಇಲ್ಲ. ಈಗಷ್ಟು ನೀವು ಬರುವಾಗ ನಾಲ್ಕು ಕಕ್ಷಿಗಾರರನ್ನು ಕಳಿಸಿಕೊಟ್ಟೆದ್ದೆ. ಒಂದು ಸಾಲಕ್ಕೆ ರಿಜಿಸ್ಟ್ರಿ ನೋಟೀಸು, ಇನ್ನೊಂದು ನೀರಿನ ವ್ಯಾಜ್ಯ, ಮತ್ತೊಂದು ಆಪೀಲು—ಹೀಗೆ ಒಂದೊಂದು. ಒಂದು ಕ್ಷಣ ಬಿಡುವಿಲ್ಲ. ಸಂಜೆಯ ಹೊತ್ತಿಗಾದರೂ ವಾಕಿಂಗ್ ಹೋಗಿ ಬರುವುದಕ್ಕೂ ಸಮಯ ಬೇಕಲ್ಲ. ಕಕ್ಷಿಗಾರರ ಸಮಯವನ್ನು ಹೊಂದಿಸಿಕೊಳ್ಳಬೇಕು. ಹಾಗೆಂದರೆ ಕೆಲವು ವಕೀಲರು ಪುಣ್ಯವಂತರಪ್ಪಾ. ಕ್ಲಬ್, ಮೀಟಿಂಗ್ ಅಂತ ತಿರುಗುತ್ತಲೇ ಇರುತ್ತಾರೆ. ಹಳ್ಳಿಯ ಆಸ್ತಿಯಿಂದ ಗೇಣಿ ಬರುವುದಿದ್ದರೆ, ಇಲ್ಲಿ ಕೇಸೊಂದೂ ಬಾರದಿದ್ದರೆ ಎಷ್ಟು ಸುಖ?

ಗೋಪಾಲ: ನನ್ನ ವಿಚಾರವೇ ಬೇರೆ ರಾಯರೇ!

ಶಂಕ: ಅಹುದಹುದು. ಮಾತಿನಲ್ಲೇ ಬಿದ್ದೆ. ಅಂದ ಹಾಗೆ, ನೀವು ಕಾಲೇಜು ಓದುತ್ತೀರಿ ಅಂದಿರಿ. ಮತ್ತೇಕೆ ತಂದೆ ವಿರುದ್ಧ ಹೋಗಬೇಕಾಯಿತು?

ಗೋಪಾಲ: ಹಾಗಾದರೆ ಕೇಳಿ. ನನ್ನ ತಂದೆ ಹಳೇ ಮನುಷ್ಯ, ಹಳೇ ಮರ್ಜಿ, ಎಲ್ಲ ಹಳತು. ನಾನು ಇಂಗ್ಲೀಷ್ ಓದುವುದು ಅವರಿಗೆ ಆಗದೇ ಆಗದು. ಸ್ವಲ್ಪ ಆಶೆಯ ಪ್ರಕೃತಿಯೂ ಕೂಡಾ. ನಾನು ಅವರ ಒಪ್ಪಿಗೆ ಇಲ್ಲದೇ ಕಾಲೇಜು ಸೇರಿದೆ. ಅವರು ಹಣ ಕೊಡದೆ ಪೀಡಿಸಿದರು. ಸಹಿಸಿ ಸಹಿಸಿ ಸಾಕಾಯಿತು ಕೊನೆಗೆ ನನ್ನ ಪಾಲನ್ನೇ ಕೇಳಿ ಸ್ವಲ್ಪ ಹೆದರಿಸುವುದಕ್ಕೆ ಆಯಿತು ಎಂದು ಒಂದು ಪತ್ರ ಬರೆದೆ. ಅದಕ್ಕವರು ಸಿಟ್ಟಿನಿಂದ ಹಾರಿದರಂತೆ! ನಾನು ಅವರ ಮಗನೇ ಅಲ್ಲವಂತೆ. ನನಗೆ ಅವರ ಆಸ್ತಿಯಲ್ಲಿ ಹಕ್ಕೇ ಇಲ್ಲವಂತೆ. ಎಲ್ಲವನ್ನೂ ನನ್ನ ತಮ್ಮನ ಹೆಸರಿಗೆ ಕೂಡಿಡುತ್ತಾರಂತೆ. ಇದಕ್ಕೆ ಏನು ಮಾಡಬೇಕೋ ದಾರಿಯೇ ತೋರುವುದಿಲ್ಲ. ನಿಮ್ಮಲ್ಲಿ ವಿಚಾರಿಸೋಣ ಅಂತ ಬಂದೆ.

ಶಂಕ: ಹಾಗೇನು ಗೋಪಾಲ್? ಏನೂ ಗಾಬರಿ ಇಲ್ಲ. ಇದ್ದಂತೆ ಮಾಡುವಾ. ನಿಮ್ಮ ಹಕ್ಕಿನ ಆಸ್ತಿ ಎಲ್ಲಿಗೆ ಹೋಗುತ್ತದೆ ನೋಡುವಾ! ನಾನೇ ತೆಗೆಸಿಕೊಡುತ್ತೇನೆ. ನನ್ನ ಮಾತು ಸಾಕು ನಿಮಗೆ. ಈಗ ಅದೊಂದನ್ನೂ ತಲೆಗೆ ಹಚ್ಚಿಕೊಳ್ಳಬೇಡಿ. ಬಿ.ಎ. ಪರೀಕ್ಷೆ ಮುಗಿಯಲಿ ಮೊದಲು.

ಗೋಪಾಲ: ಅಷ್ಟರ ತನಕ ಬದುಕಬೇಕಲ್ಲ! ಈಗಾಗಲೇ ಸಾಲ ಐನೂರಕ್ಕೇರಿದೆ.

ಶಂಕ: ಅದಕ್ಕೇಕೆ ಚಿಂತೆ ಗೋಪಾಲ್? ನಾನು ಕೊಡುತ್ತೇನೆ. ನಿಮ್ಮಂಥ ಉತ್ತಮ ಯುವಕರಿಗೆ ನೆರವಾಗುವುದು ಒಂದು ಒಳ್ಳೆ ಕೆಲಸವಲ್ಲವೇ?

ಗೋಪಾಲ: ಅಪ್ಪನಿಗೆ ಬೇಡವಾದ ಮಗ ನಾನು, ನಿಮಗೇಕೆ ಉಪದ್ರ?

ಶಂಕ: ಏನು, ಉಪದ್ರವವೇ? ಸಂತೋಷವೇ. ನನಗಂತೂ ಮಗನ ಪುಣ್ಯವೇ ಇಲ್ಲ. ಒಬ್ಬ ಮಗ ಸಿಕ್ಕಿದಷ್ಟು ಸಂತೋಷವಾಗುತ್ತದೆ ನನಗೆ. (ಏನೋ ಯೋಚಿಸಿ) ಹೋ ಮರೆತೇ ಬಿಟ್ಟೆ. ಈಗ ಬಂದೆ.... ಈಗ ಬಂದೆ. (ತೆರಳುವರು.)

ಗೋಪಾಲ: (ಸ್ವಗತಃ) ಏಕೆ ನಾನು ಇವರ ಸಹಾಯವನ್ನು ಬಿಡಬೇಕು? ಅವರಾಗಿಯೇ ಮುಂದೆ ಬಂದಿದ್ದಾರೆ; ಅಪ್ಪನ ತಂಟೆಯೂ ತಪ್ಪುತ್ತದೆ........ಆದರೆ....ಅಲ್ಲ, ಇವರೇಕೆ ಹೀಗೆ ಮುಂದಾದರೂ........ಏನೋ ಇರಬೇಕು ಒಳಗೆ!........ಏನೇ ಇರಲಿ. ಅದೆಲ್ಲ ಮತ್ತಿನ ವಿಚಾರ. ಈಗ ಪಾಲಿಗೆ ಬಂದದ್ದೇ ಪಂಚಾಮೃತ.

ಶಂಕ: (ಪ್ರವೇಶಿಸಿ) ನೋಡಿ ಗೋಪಾಲ್! ಇದು ನಮ್ಮ ಮನೆ. ಇಲ್ಲೇ ಆಫೀಸು—ಎಲ್ಲ ಅನುಕೂಲ. ಕೈತುಂಬ ಕೆಲಸವಿರುವಾಗ, ಮನೆ ಯಲ್ಲೂ ಮಗಳೊಬ್ಬಳೇ ಇರುವಾಗ, ಯಾರು ಓಡಾಡಿ ಸಾಯುವುದು? (ಒಳಗಿನಿಂದ ಹೆಣ್ಣು ಸ್ವರದಿಂದ ಹಾಡೊಂದು ಕೇಳಿಸುವುದು.) ಏನು, ಸಂಗೀತದಲ್ಲೇ ಮುಳುಗಿಬಿಟ್ಟಿರಿ? ಅದು ನನ್ನ ಮಗಳ ಸಂಗೀತ. ಒಬ್ಬಳೇ ಮಗಳು; ಈಗೇನೋ ಕಾಲೇಜಿಗೆ ಹೋಗುತ್ತಾಳೆ. ಫಸ್ಟ್ ಇಯರಿನಲ್ಲಿ ಓದುತ್ತಾಳೆ. ಈ ವರ್ಷದಲ್ಲೇ ಮದುವೆಮಾಡಿ ಕೊಡಬೇಕು ಅಂತ ಇದ್ದೇನೆ.

ಗೋಪಾಲ: ಅಷ್ಟೇನು ಅವಸರ? ಕಾಲೇಜ್ ಶಿಕ್ಷಣ ಪೂರ್ಣಗೊಳಿಸ ಬಾರದೇ?

ಶಂಕ: ನನ್ನ ಯೋಚನೆಯೂ ಅದೇ. ಆದರೆ, ಯೋಗ್ಯ ಅಳಿಯ ಬಂದಾಗ ಬಿಡಲು ಬರುತ್ತದೆಯೇ? ಅದಿರಲಿ ಗೋಪಾಲ್, ಮುಂದೆ ನಿಮ್ಮ ದೇನು ಯೋಚನೆ? ಬಿ. ಎ. ಮುಗಿಸಿ ಮತ್ತೇನು ಹಿಡಿಯುತ್ತೀರಿ?

ಗೋಪಾಲ: ಹಣದ ಸ್ವಾತಂತ್ರ್ಯವಿಲ್ಲದ ನಾನು ಏನು ಯೋಚನೆ ಮಾಡಲು ಬರುತ್ತದೆ? ಈ ಬಗ್ಗೆ ನಿಮ್ಮೊಡನೆಯೇ ಕೇಳಬೇಕೆಂದು ಗ್ರಹಿ ಸಿದ್ದೇನೆ.

ಶಂಕ: ಹಾಗಾದರೆ ನೀವು "ಲಾ" ಓದಬೇಕು. ಬಿ.ಎಲ್. ಡಿಗ್ರಿ ಮಾಡಿ ನನ್ನೊಟ್ಟಿಗೆ ಪ್ರಾಕ್ಟೀಸು ಮಾಡಬಾರದೇಕೆ? ನನಗೂ ಪ್ರಾಯವಾ ಯಿತು; ಒಬ್ಬ ಸಹಾಯಕನ ಅವಶ್ಯವಿದ್ದೇ ಇದೆ, ಇಂದಲ್ಲ ನಾಳೆ.

ಗೋಪಾಲ: ನನ್ನ ಅಡ್ಡಿ ಇಲ್ಲ ರಾಯರೇ. ಆದರೆ, ನಿಮ್ಮ ಈ ಋಣ ವನ್ನು ನಾನು ಯಾವಾಗ, ಹೇಗೆ ಸಲ್ಲಿಸಿಯೇನೋ ಎನ್ನುವ ಭಯ— ನನಗೆ.

ಶಂಕರ: ಅದಕ್ಕಾಗಿ ಚಿಂತಿಸುವ ಅವಶ್ಯವಿಲ್ಲ ಗೋಪಾಲ್. ಮುಂದೆ ಎಲ್ಲವೂ ಸರಿಹೋಗುತ್ತದೆ. ಈಗ ನಿಮ್ಮ ಓದುವಿಕೆಯಾಗಲಿ ಯಾವು ದಕ್ಕೂ.

ಗೋಪಾಲ: ಹಾಗಾದರೆ ನಾನೀಗ ಹೊರಡಲೇ? ಪರೀಕ್ಷೆಗಾಗಿ ತುಂಬ ಓದಲಿಕ್ಕಿದೆ. ನಮಸ್ಕಾರ.

ಶಂಕರ: ನಿಮ್ಮ ಓದಿಗೆ ನಾನೇನೂ ಅಡ್ಡಿಮಾಡುವುದಿಲ್ಲ. ಆದರೆ, ರಾತ್ರಿ ಊಟ ತೀರಿಸಿ ಹೋದರೆ ಸಾಲದೆ? ಹೊತ್ತೂ ಆಯಿತು.

ಗೋಪಾಲ: ಅದೇನೂ ಬೇಡ ರಾಯರೇ. ನನ್ನ ತಮ್ಮನನ್ನು ರೂಮಿನಲ್ಲಿ ಒಬ್ಬನನ್ನೇ ಬಿಟ್ಟುಬಂದಿದ್ದೇನೆ- ಎಷ್ಟು ಕಾದಿರುತ್ತಾನೋ ಏನೋ.

ಶಂಕ: ಒಂದಿಷ್ಟು ಕಾಫಿಯನ್ನಾದರೂ ಕುಡಿದು ಹೋಗಬಹುದಲ್ಲ! ಲಲಿತಾ,ಲಲಿತಾ,ಇಲ್ಲಿ ಎರಡು ಕಪ್ ಕಾಫಿ ತಾವಮ್ಮ! ನೋಡಿ ಗೋಪಾಲ್, ನನ್ನಾಕೆ ತೀರಿಹೋದ ಮೇಲೆ ಎಲ್ಲಾ ಲಲಿತಳದೇ ಕಾರುಬಾರು. (ಲಲಿತ ಕಾಫಿ ತರುತ್ತಾಳೆ.) ಸರಿ. ಹೇಗೆ, ಚೆನ್ನಾಗಿ ಮಾಡಿದ್ದಿಯಲ್ಲ? (ಲಲಿತ ಕಾಫಿ ಕಪ್ ಇಟ್ಟುಹೋಗುತ್ತಾಳೆ.) ತೆಕ್ಕೊಳ್ಳಿ ಗೋಪಾಲ. (ಇಬ್ಬರೂ ಕುಡಿಯುವರು) ಪರ್ವಾಯ್ ಇಲ್ಲ. ಚೆನ್ನಾಗಿಯೇ ಇದೆ ಕಾಫಿ

ಗೋಪಾಲ: (ಕಪ್ ಕೆಳಗಿಟ್ಟು) ಆಯಿತು, ಇನ್ನು ನಾನು ಹೊರಡಲೇ? ನಮಸ್ಕಾರ.

ಶಂಕರ: ಸರಿ. ನಮಸ್ಕಾರ. ಅಂದ ಹಾಗೆ,ಹಣ ಬೇಕಾದಾಗ, ಇಲ್ಲಿಗೆ ಬನ್ನಿ. ನಾನು ಕೊಡುತ್ತೇನೆ. ಯಾವುದಕ್ಕೂ ನಿಮ್ಮ ಪರೀಕ್ಷೆಯೊಂದು ಕಳೆಯಲಿ.

ಗೋಪಾಲ: ಆಯಿತು. ತುಂಬ ಉಪಕಾರ. ಬರುತ್ತೇನೆ.. ನಮಸ್ಕಾರ. (ತೆರಳುವನು.) (ತೆರೆ ಬೀಳುವುದು.)

## ದೃಶ್ಯ ೪

(ಶಂಕರರಾಯರ ಆಫೀಸು. ಲಲಿತ ಏನನ್ನೊ ಓದುತ್ತಾ ಇದ್ದಾಳೆ. ಬೆಳಗ್ಗಿನ ಹೊತ್ತು.)

ವೆಂಕಟ್ರಮಣಯ್ಯ: (ಪ್ರವೇಶಿಸುವರು. ಕೈಯಲ್ಲಿ ಒಂದು ತಂಬಿಗೆ ಮತ್ತು ಎರಡು ಅನಾನಸು ಹಿಡಿದುಕೊಂಡಿದ್ದಾರೆ. ಸಂಕುಳಲ್ಲಿ ರಿಕಾರ್ಡು ಕಟ್ಟು ಇದೆ. ಅವನ್ನೆಲ್ಲಾ ಮೇಜಿನ ಮೇಲಿರಿಸಿ):—ತೆಕ್ಕೊಳ್ಳಿ ಅಮ್ಮಾ, ತೆಕ್ಕೊಳ್ಳಿ. ನಿಮ್ಮಲ್ಲಿಗಾಗಿಯೇ ಇವನ್ನು ತಂದಿದ್ದೇನೆ. ಇದು ತಾಜಾ ಹಸುವಿನ ತುಪ್ಪ, ಒಳಗೆ ಕೊಂಡುಹೋಗಿ ಅಮ್ಮಾ. ನೀವು ವಕೀಲರ ಮಗಳಲ್ಲವೇ ಅಮ್ಮಾ?

ಲಲಿತ: (ಸರಿದು ನಿಂತು) ಹೌದು.

ವೆಂಕ: ಇವನ್ನು ಒಳಗೆ ಕೊಂಡುಹೋಗಿ ಅಮ್ಮ. ಒಳ್ಳೆ ಅನಾನಸು..

ಲಲಿತ: ಇದೆಲ್ಲ ಯಾಕೆ ಸುಮ್ಮನೆ ತಂದಿದ್ದೀರಿ?

ವೆಂಕ: ಛೀ, ಹಾಗೂ ಉಂಟೆ? ವಕೀಲರಲ್ಲಿ ಬರೇ ಕೈಯಲ್ಲಿ ಬರುವುದಕ್ಕಾಗುತ್ತದೆಯೇ? ಏನು ಕ್ರಯ ಕೊಟ್ಟಿದ್ದೇ? ಏನೂ ಇಲ್ಲ. ಉಪ್ಪಿನಕಾಯಿಗೆ ಮಾವಿನ ಮಿಡಿ ಇದ್ದರೆ ತನ್ನಿ ಅಂತ ವಕೀಲರು ಯಾವಾಗಲೋ ಹೇಳಿದ ನೆನಪು. ಆದರೆ, ಈಗ ಎಲ್ಲೂ ಮಿಡಿಯೇ ಬೆಳೆಯಲಿಲ್ಲ. ಇನ್ನೊಮ್ಮೆ ಬರುವಾಗ ತರುತ್ತೇನೆ.

ಲಲಿತ: ಅಪ್ಪನಿಗೆ ಕೆಲಸವಿಲ್ಲ. ಅದೇನೂ ಬೇಡ ನಮಗೆ. ಬೇಕಾದರೆ ಇಲ್ಲಿ ಮಾರ್ಕೆಟ್ಟಿನಿಂದ ತರಲಿಕ್ಕಾಗುವುದಿಲ್ಲವೇ?

ವೆಂಕ: ಒಳ್ಳೆ ಜಾತಿದ್ದು ಸಿಕ್ಕಬೇಕಲ್ಲ. ದುಡ್ಡೂ ಕೊಡಬೇಕು. ಅಂತೂ ನಿಮ್ಮ ಸವಾಲು ಚೆನ್ನಾಗಿದೆಯಮ್ಮ. ನೀವೇನು ಶಾಲೆಗೆ ಹೋಗುತ್ತೀರಾ?

ಲಲಿತ: ಹೌದು, ಕಾಲೇಜಿನಲ್ಲಿ ಕಲಿಯುತ್ತೇನೆ.

ವೆಂಕ: ಹಾಂ. ಕಾಲೇಜ್? ಹೆಣ್ಣುಮಕ್ಕಳೂ ಇಂಗ್ಲೀಷು ಕಲಿಯುವುದೇ? ಬಹಳ ಪುಣ್ಯವಂತೆಯಪ್ಪ. ಶಂಕರರಾಯರ ಭಾಗ್ಯವಪ್ಪ!

ಲಲಿತ: ನಿಮಗೆ ಮಕ್ಕಳು........

ವೆಂಕ: (ತಡೆದು) ಇದ್ದಾವೆ ಎರಡು ಗಂಡು, ಮನೆತೆಗೆಯುವಂಥಾದ್ದು. (ಅತ್ತಿತ್ತ ನೋಡಿ) ಅಮ್ಮಾ, ವಕೀಲರಿಲ್ಲವೇ?

ಲಲಿತ: ಇದ್ದಾರೆ ಇದ್ದಾರೆ, ಈಗ ಬರುತ್ತಾರೆ. ಕೂತುಕೊಳ್ಳಿ. (ಒಳಗೆ ಹೋಗುವಳು.)

ವೆಂಕ: ಎಷ್ಟು ಚುರುಕಿದ್ದಾಳಪ್ಪ ಈ ಹುಡುಗಿ? ನನಗಂತೂ ಭಾಗ್ಯವೇ ಇಲ್ಲ; ಇಂಥ ಸೊಸೆ ಕನಸಿನಲ್ಲೂ ಸಿಕ್ಕಲಿಕ್ಕಿಲ್ಲ. ಇದ್ದ ಮಗನೂ ಮೂರುಕಾಸಿನವನಾಗಬೇಕೇ? ನನ್ನ ಗ್ರಹಚಾರ. (ತಲೆತಗ್ಗಿಸಿ ಕುಳಿತಿರುವರು.)

ಶಂಕರರಾಯ: (ಪ್ರವೇಶ) ಓಹೋ ಹೋ! ವೆಂಕಟ್ರಮಣಯ್ಯನವರು, ಬಹಳ ಅಪರೂಪ. ನಮಸ್ಕಾರ, ನಮಸ್ಕಾರ.

ವೆಂಕ: (ತಲೆ ಎತ್ತಿ) ನಮಸ್ಕಾರ ವಕೀಲರಿಗೆ.

ಶಂಕ:(ಮೇಜು ನೋಡಿ) ಇದೆಲ್ಲಾ ಏನು ಗದ್ದಲ? ಏಕಿಷ್ಟು ತೊಂದರೆ ತೆಗೆದುಕೊಂಡಿರಿ ವೆಂಕಟ್ರಮಣಯ್ಯನವರೇ? ಯಾವಾಗಲೋ ಏನೋ ಹೀಗೇ ಹೇಳಿದ್ದು, ತಮಾಷೆಗೆ. ತಂದೇ ಬಿಟ್ಟಿರಿ. (ಅವನ್ನು ಕೆಳಗಿಳಿಸಿ) ಸರಿ; ಮತ್ತೇನು ವಿಶೇಷ?

ವೆಂಕ: ವಿಶೇಷಗಿಶೇಷ ಒಂದೂ ಕೇಳಬೇಡಿ ಶಂಕರರಾಯರೇ. ಖರ್ಚೆಷ್ಟಾದರೂ ಚಿಂತಿಲ್ಲ, ಹೈಕೋರ್ಟಿನ ತನಕ ಹೋಗಿ ಬಂದರೂ ಚಿಂತಿಲ್ಲ; ನನ್ನ ಮನೆ ಮಾರಿಹೋದರೂ ಚಿಂತಿಲ್ಲ; ನನ್ನ ಒಂದು ನಂಬ್ರ ಆಗಿಯೇ ತೀರಬೇಕು.

ಶಂಕ: ಎಂಥ ನಂಬ್ರವಪ್ಪಾ ಅದು?

ವೆಂಕ: ಮತ್ತೇನೂ ಅಲ್ಲ. ನನಗೊಬ್ಬ ಮೂರ್ಖ ಮಗನಿದ್ದಾನೆ. ಅವನಿಗೆ ನನ್ನ ಆಸ್ತಿಯಲ್ಲಿ ಹಕ್ಕು ಇಲ್ಲದ ಹಾಗೆ ಮಾಡಬೇಕು ಈಗ. ರಿಕಾರ್ಡ್ ಏನು ಬೇಕೋ ಅದೆಲ್ಲಾ ತಯಾರಿಸಿ ಕೊಡುವ ಕೆಲಸ ನನ್ನದು. ರಿಕಾರ್ಡನ್ನು ಚೊಕ್ಕ ಮಾಡಿಕೊಡುವ ಕೆಲಸ ನಿಮ್ಮದು. (ರಿಕಾರ್ಡ್ ಕಟ್ಟನ್ನು ಎತ್ತಿ ಮೇಜಿನ ಮೇಲಿಟ್ಟು ಕಿಸೆಯಿಂದ ನೋಟಿನ ಕಟ್ಟನ್ನು ತೆಗೆದು) ಇಕ್ಕೊಳ್ಳಿ ರುಸುಂ; ಮೊದಲೇ ಎಷ್ಟು ಬೇಕು ಹೇಳಿ.

ಶಂಕ: ಛೇ, ಛೇ, ಅಷ್ಟು ಗಡಿಬಿಡಿಮಾಡಿದರೆ ಹೇಗೆ ವೆಂಕಟ್ರಮಣಯ್ಯನವರೇ? ನಿಮ್ಮ ಕೆಲಸ ನಾನು ಮಾಡಿಕೊಡುತ್ತೇನೆ. ಹೆದರಬೇಡಿ, ಮೊದಲು ಸಮಾಧಾನಮಾಡಿಕೊಳ್ಳಿ.

ವೆಂಕ: ಸಮಾಧಾನಮಾಡಿ ಇಷ್ಟು ನಿಧಾನವಾಯಿತು. ಅವನಿಗೆ ಮಾತ್ರ ಎಂದೋ ತಿಲೋದಕ ಕೂಡಾ ಬಿಟ್ಟಾಗಿದೆ. ಇನ್ನು ಆಸ್ತಿ ಹಕ್ಕನ್ನು ಕಡಿಯುವುದೊಂದೇ ಬಾಕಿ.

ಶಂಕ: ನಿಮ್ಮ ಹಿರೇ ಮಗನಲ್ಲವೇ? ಅವನು ಎಲ್ಲಿದ್ದಾನೆ? ಅವನು ಏನು ಮಾಡಿದ್ದಾನೆ? ಎಲ್ಲ ವಿವರಿಸಿ ಹೇಳಿ ಮೊದಲು.

ವೆಂಕ: ಆ ಮಂಗನ ಹೆಸರು ಗೋಪಾಲ ಅಂತ. ಬೇಡ ಬೇಡ ಎಂದರೂ ಹೇಳದೆ ಕೇಳದೆ ಇಂಗ್ಲಿಷು ಕಲಿಯಲಿಕ್ಕೆ ಇಲ್ಲಿಗೆ ಬಂದಿದ್ದಾನೆ. ಬರುವಾಗ ನಾನೊಬ್ಬ ತಂದೆ ಇದ್ದೇನೆಂದು ಕೂಡಾ ಯೋಚಿಸಿದ್ದಾನೆಯೇ ಆ ಕೆಟ್ಟವ? ಮತ್ತೆ ಮನೆ ಕಡೆ ನೋಡಲೇ ಇಲ್ಲ. ಕೊನೆಗೆ ಪಾಲು ಇಟ್ಟು ಬಿಡಿ ಅಂತ ಕಾಗದ ಬರೆದ ಅಂದರೆ ಏನು ಹೇಳಬೇಕು ನೀವೇ ಹೇಳಿ. ಇದು ಸರಿಯೇ? ಖಂಡಿತ ಹೇಳುತ್ತೇನೆ ವಕೀಲರೇ, ಅವನಿಗೆ ನನ್ನ ಆಸ್ತಿಯಲ್ಲಿ ಇಷ್ಟೂ ಹಕ್ಕಿಲ್ಲ! ನನ್ನ ಆಸ್ತಿಯನ್ನೆಲ್ಲಾ ಸಣ್ಣ ಮಗನ ಹೆಸರಿನಲ್ಲಿ ಮಾಡಿಟ್ಟೇ ಶುದ್ಧ. ನೋಡಬೇಕು ಮತ್ತೆ ಪಾಲು, ಅವನಿಗೆ ಜೊಂಪಾಲು.

ಶಂಕ: ಸರಿ, ಎಲ್ಲ ತಿಳಿಯಿತು ವೆಂಕಟ್ರಮಣಯ್ಯನವರೇ, ನಿಮಗೆ ಹೇಗೆ ಬೇಕೋ ಹಾಗೆ ರಿಕಾರ್ಡ್‌ಮಾಡಿಕೊಡುತ್ತೇನೆ. ಯಾವುದಕ್ಕೂ

ಸ್ವಲ್ಪ ಸಮಯ ಬೇಕಲ್ಲ. ನೀವು ಈ ಹೊತ್ತು ಸಂಜೆಗೆ ಬಂದರೆ ಎಲ್ಲ ತಯಾರು ಮಾಡಿಡುತ್ತೇನೆ. ಮತ್ತೆ ಬನ್ನಿ, ಆಗದೆ?

ವೆಂಕ: ಅಯಿತು ವಕೀಲರೇ, ಅದರಲ್ಲೇನಂತೆ? ನಿಮಗೂ ಕೆಲಸ ವಿಲ್ಲವೇ? ಆದರೆ, ನಾನು ಎಲ್ಲ ಕೆಲಸ ಮುಗಿಸಿಯೇ ಊರಿಗೆ ಹೋಗುವುದು. ಅಲ್ಲ ನನ್ನ ಹತ್ತಿರ ಪಾಲು ಕೇಳುತ್ತಾನೆ ಎಂದರೆ ಏನು ಹೇಳಬೇಕು? ನನ್ನ ಮಗ ಆದರೆ ಅವನು ಹಾಗೆ ಕೇಳುತ್ತಿದ್ದನೇ? ಅವನು ನನ್ನ ಮಗನೇ ಅಲ್ಲ. ಆದರೆ, ವಕೀಲರೇ, ರಿಕಾರ್ಡ್ ಅಂದರೆ ಅಷ್ಟು ಚೊಕ್ಕ ಮಾಡಿಕೊಡಬೇಕು. ಶೇಷ ಉಳಿಯಲೇ ಬಾರದು. ಮತ್ತೆ ಖರ್ಚು ಎಷ್ಟು ಬೇಕಾದರೂ ಆಗಲಿ, ಚಿಂತಿಲ್ಲ. ಈಗ ನಿಮಗೆ ಎಷ್ಟು ಬೇಕು ಹೇಳಿ.

ಶಂಕ: (ಯೋಚನೆ ಮಾಡಿ) ರೂಪಾಯಿಯೆ? ಈಗ ಒಂದು ಸಾವಿರ ಕೊಡಿ. ಮತ್ತೆಲ್ಲ ಮತ್ತೆ ನೋಡೋಣ.

ವೆಂಕ: ಸಾವಿರ? ಆಗಲಿ; ಅದಕ್ಕೇನಂತೆ? ಇಕೊಳ್ಳಿ, ನನ್ನ ಕೈಯಲ್ಲೇ ಇದೆ ಅಷ್ಟು (ಕೊಡುವರು).

ಶಂಕ: ಸರಿ, ಒಂದು ಸಾವಿರ ಬಂತು ಹಾಗಾದರೆ. ಮತ್ತೆ ಸಂಜೆ ಬನ್ನಿ.

ವೆಂಕ: (ಕೊಡೆ ಕಂಕುಳಿಗೇರಿಸಿ) ನಮಸ್ಕಾರ, ಬರುತ್ತೇನೆ ವಕೀಲರೇ. (ತೆರಳುವರು). (ತೆರೆ ಬೀಳುವುದು).

## ದೃಶ್ಯ ೫

(ಶಂಕರರಾಯರ ಆಫೀಸು. ಸಂಜೆಯ ಹೊತ್ತು ಮೆಲ್ಲನೆ ಗೋಪಾಲನು ಪ್ರವೇಶಿಸುತ್ತಾನೆ. "ಶಂಕರರಾಯರಿನ್ನೂ ಕೋರ್ಟಿನಿಂದ ಬಂದಿಲ್ಲವೋ ಏನೋ! ——ಈಗ ಬಂದಾರು" ಎನ್ನುತ್ತಾ ಕುರ್ಚಿಯನ್ನೆಳೆದು ಕುಳಿತುಕೊಳ್ಳುವನು. ಪುಸ್ತಕವೊಂದನ್ನು ತೆಗೆದು ಪುಟ ತಿರುವುತ್ತಾ ಇರುವನು.)

ಶಂಕರರಾಯರು: (ಪ್ರವೇಶ) ಹಲೋ ಗೋಪಾಲ್! ಆಗಲೇ ಬಂದಿ ಏನು!

ಗೋಪಾಲ್: ಇಲ್ಲ, ಈಗತಾನೆ ಬಂದೆಯಷ್ಟೆ.

ಶಂಕ: ಕೋರ್ಟಿನಲ್ಲಿ ಒಂದು 'ಸೂಟ್ ಫೈಲ್' ಮಾಡಲಿಕ್ಕಿತ್ತು. ಸ್ವಲ್ಪ ತಡವಾಯಿತು.... ಇಲ್ಲಿ ಯಾರೂ.... ಲಲಿತಾ, ಲಲಿತಾ....

ಲಲಿತ: ಓ, ಬಂದೆ. (ಪ್ರವೇಶಿಸಿ) ಏನಪ್ಪ? (ಗೋಪಾಲನನ್ನು ಕಂಡು ಹಿಂದೆ ಸರಿದು)

ಶಂಕರ: ನೋಡು, ನಮ್ಮ ಗೋಪಾಲ್ ಆಗಲೇ ಬಂದಿದ್ದಾನೆಂದು ಕಾಣುತ್ತದೆ. ಎಷ್ಟು ಕಾದುಕುಳಿತನೋ ಏನೋ! ನೋಡು, ಫಕ್ಕನೆ ಎರಡು ಕಪ್ ಕಾಫಿ ಮಾಡಿ ತಾಮ್ಮಾ.

ಗೋಪಾಲ್: ಏನೂ ಬೇಡ. ಈಗಷ್ಟೆ ಎಲ್ಲ ಆಗಿ ಬಂದೆ. ಹಾಗೆ ಹೆಚ್ಚು ಕಾಫಿ ಕುಡಿದರೂ ಆಗುವುದಿಲ್ಲ.

ಶಂಕ: ನೀವು ಯುವಕರು ಕಾಫಿ ಆಗದೆಂದರೆ? ಹೂಂ, ನೀನು ಹೋಗಮ್ಮ, ಬೇಗ ತಾ. (ಲಲಿತ ತೆರಳುವಳು). ಗೋಪಾಲ್, ನಾನೀಗ ಬಂದೆ. ಒಂದು ಐದು ನಿಮಿಷ. ಬೇಕಾದರೆ ಏನಾದರೂ ಲಾಪುಸ್ತಕವೊ, ಪೇಪರೊ, ಓದುತ್ತಾ ಇರು. ಈಗ ಬಂದೆ (ತೆರಳುವರು).

ಗೋಪಾಲ: (ಪುಸ್ತಕವೊಂದನ್ನು ತೆಗೆದು, ನಿಟ್ಟುಸಿರು ಬಿಟ್ಟು) ಈಗ ಹೇಗೆ ರೂಪಾಯಿ ಕೇಳುವುದು ಎಂತಲೇ ಗೊತ್ತಾಗುವುದಿಲ್ಲ. ದುಡ್ಡು ಕೊಡಿ ಅಂತ ಬೇಡಬೇಕಲ್ಲ. ಒಟ್ಟಾರೆ ಕಷ್ಟ. (ಪುಟ ತಿರುವುತ್ತಾ ಕೂತಿರುವನು.)

ಲಲಿತ: (ಕೈಯಲ್ಲಿ ಎರಡು ಕಪ್ ಕಾಫಿಯೊಂದಿಗೆ ಪ್ರವೇಶ; ಮೇಜಿನ ಮೇಲಿರಿಸಿ) ಕಾಫಿ ಇಟ್ಟಿದ್ದೇನೆ!

ಗೋಪಾಲ: (ತಲೆ ಎತ್ತಿ, ಮತ್ತೆ ತಗ್ಗಿಸಿ) ಶಂಕರರಾಯರು—(ತಲೆ ಎತ್ತಿ) ಶಂಕರರಾಯರು ಎಲ್ಲಿ?

ಲಲಿತ: (ಮೇಜಿನ ಪುಸ್ತಕಕ್ಕೆ ಕೈಯಿಕ್ಕಿ) ಯಾಕು, ಅಪ್ಪಯ್ಯ ಈಗ ಬರುತ್ತಾರೆ.

ಗೋಪಾಲ: ಅವರೂ ಬರಲಿ.

ಲಲಿತ: ಈಗ ಬಂದಾರು, ನೀವು ತೆಕ್ಕೊಳ್ಳಿ.

ಶಂಕರ: (ಪ್ರವೇಶ) ಲಲಿತಾ, ಎಲ್ಲಿ, ಕಾಫಿ ತಂದೆಯೋ ಅಮ್ಮಾ?

ಲಲಿತ: ಹೌದಪ್ಪ, ತಕ್ಕೊಳ್ಳಿ.

ಶಂಕರ: ಎಲ್ಲಿ ನಿನ್ನ ಕಾಫಿ? ಇಲ್ಲಿಗೇ ತಾ, ಒಟ್ಟಿಗೆ ಕುಡಿಯುವಾ.

ಲಲಿತ. ನಾನು ಒಳಗೆ ತೆಕ್ಕೊಳ್ಳುತ್ತೇನಪ್ಪಾ (ತೆರಳುವಳು.)

ಶಂಕರ: ಏನು ನಾಚಿಕೆಯಪ್ಪಾ ಇವಳಿಗೆ! (ಒಳಗೆ ಹೋಗಿ ಮಗಳೊಂದಿಗೆ ಬರುವರು. ಅವಳ ಕೈಯಲ್ಲಿ ಕಪ್ ಕಾಫಿ ಇರುವುದು). ಬಾ ಇಲ್ಲಿ ಕುಳಿತುಕೊಂಡು ನೀನೂ ಕಾಫಿ ತಕ್ಕೊ (ಕುರ್ಚಿಯೊಂದರಲ್ಲಿ ಕೂರಿಸುವರು). ಸರಿ, ಇನ್ನು ಕುಡಿಯುವಾ ತಕ್ಕೊ. ಗೋಪಾಲ್, ತಕ್ಕೊ. ಅಂದ ಹಾಗೆ, ಲಲಿತ, ಅಲ್ಲಿ ನಿನ್ನೆ ತಂದ ಕಿತ್ತಳೆ ಇದೆಯಲ್ಲ, ನೋಡಿಲ್ಲಿ

ಒಂದು ನಾಲ್ಕು ತಾ. (ಲಲಿತ ಎದ್ದು ಹೋಗಿ ತಟ್ಟೆಯಲ್ಲಿ ಕಿತ್ತಳೆ ತಂದು, ಮೇಜಿನ ಮೇಲಿರಿಸುವಳು). ಹಾಗೆ ಇನ್ನು ನಮ್ಮ ಲಘೂಪಹಾರವಾಗಲಿ. ತಕ್ಕೊ ಗೋಪಾಲ್ ತಕ್ಕೊ.(ಎಲ್ಲರೂ ಒಂದೊಂದು ತೆಗೆದು ಸುಲಿಯುವರು. ತಿನ್ನುತ್ತಾ) ಹಣ್ಣು ಚೆನ್ನಾಗಿಯೇ ಇದೆ ಅಲ್ಲವೆ ಗೋಪಾಲ್? ಗೋಪಾಲ್, ನೀನು ಕೊಲೇಜಿನಿಂದ ಸೀದಾ ಇಲ್ಲಿಗೇ ಬಂದಿಯೇನು?

ಗೋಪಾಲ: ಇಲ್ಲ, ಕೋಣೆಗೆ ಹೋಗಿ ಬಟ್ಟೆ ಬದಲಿಸಿ, ಕಾಫಿ ಮುಗಿಸಿ ಇಲ್ಲಿಗೆ ಬಂದೆ.

ಲಲಿತ: ಈವೊತ್ತು ಕೊಲೇಜು ಸ್ವಲ್ಪ ಬೇಗ ಬಿಟ್ಟಿದ್ದಾರಪ್ಪ; ಏನೋ 'ಯೂನಿಯನ್ ಮೀಟಿಂಗ್' ಇದೆಯಂತೆ!

ಗೋಪಾಲ: (ಲಲಿತಳನ್ನು ನೋಡಿ) ಏನು, ಈವೊತ್ತು 'ಯೂನಿಯನ್ ಮೀಟಿಂಗ್' ಇತ್ತೇ? ಏನೋ ತಲೆ ಸಿಡಿಯಿತು ಅಂತ ನಾನು ಸೀದಾ ಕೋಣೆಗೆ ಬಂದಿದ್ದೆ! (ಲಲಿತ ಮುಗುಳು ನಕ್ಕು ತಲೆ ತಗ್ಗಿಸುವಳು).

ಶಂಕ: ಓಹೋಹೊ! ನೀವಿಬ್ಬರೂ ಒಂದೇ ಕೊಲೇಜಿನಲ್ಲಿ ಕಲಿವವರು. ಸರಿ ಸರಿ, ಮತ್ತೇನು? (ಗೋಪಾಲ ಲಜ್ಜೆಯಿಂದ ಲಲಿತಳ ಮುಖ ನೋಡಿ, ತಲೆ ತಗ್ಗಿಸುವನು.)

ಲಲಿತ: (ನಾಚಿಕೆ ಪ್ರಕಟಿಸುವಳು).

ಶಂಕ: ಸರಿ ಎನ್ನಿ. ನೋಡು ಗೋಪಾಲ್, ನೀನು ಲಲಿತಳನ್ನು ಬಲ್ಲೆ!

ಲಲಿತ: ಅಪ್ಪ ನಾನು ಒಳಗೆ ಹೋಗುತ್ತೇನಪ್ಪಾ. ಎಲ್ಲಿ, ಆ ಕಪ್ ಇಲ್ಲಿ ಕೊಡಿ.

ಶಂಕ: ಇರಲಿ ಅಮ್ಮ, ಸ್ವಲ್ಪ ಕುಳಿತು ಮಾತಾಡೋಣ ಹೀಗೆ ಬಿಡು ಸಿಕ್ಕುವುದೇ ಪುಣ್ಯ. ಅದನ್ನೂ ಕಳಕೊಳ್ಳಬೇಕೇ? ನೋಡು ಲಲಿತ, ಗೋಪಾಲ್–ಒಂದು ವಿಚಾರವನ್ನು ಇಂದೇ ನಿಶ್ಚಯ ಮಾಡಿಬಿಡಬೇಕು ಅಂತ ಇದ್ದೇನೆ. ಹೇಗೂ ನೀವು ಬಂದವರೂ ಇದ್ದೀರಿ. (ಗೋಪಾಲ ತಲೆ ಎತ್ತುವನು). ಮತ್ತೇನಿಲ್ಲ ಇವಳು ನನ್ನ ಒಬ್ಬಳೇ ಮಗಳು. ನೀನಂತೂ ನಮ್ಮವನೇ. ನಿಮ್ಮಿಬ್ಬರ ಒಪ್ಪಿಗೆ ಇದ್ದರೆ (ಲಲಿತಳ ಮುಖವನ್ನು ಗೋಪಾಲ ನೋಡುತ್ತಾನೆ. ಇಬ್ಬರೂ ನಕ್ಕು ತಲೆ ತಗ್ಗಿಸುವರು). ನಿಮ್ಮ ಮದುವೆಮಾಡಬೇಕೆಂದಿದ್ದೇನೆ. ಏನು ಹೇಳುತ್ತೀ ಗೋಪಾಲ್? ಲಲಿತಾ, ನಿನ್ನ ಅಭಿಪ್ರಾಯವೇನು? (ಮತ್ತೊಮ್ಮೆ ಇಬ್ಬರೂ ಮುಖ ಮುಖ ನೋಡಿ ನಕ್ಕು ತಲೆತಗ್ಗಿಸುವರು). ಏನು, ಇಬ್ಬರೂ ಮೌನ! ಒಪ್ಪಿಗೆ ತಾನೇ? ಸರಿ! ಇಲ್ಲಿಯೇ ನಿಶ್ಚಯಿಸಿ ಬಿಡುವಾ. ಲಗ್ನ ನಾಳೆಯಾದರೂ ನನ್ನ ಅಡ್ಡಿಯಿಲ್ಲ!

ಗೋಪಾಲ: ನಮ್ಮ ಪರೀಕ್ಷೆ ಹತ್ತಿರ ಬಂತಲ್ಲ...

ಶಂಕ: ಅದಕ್ಕೂ ಅಡ್ಡಿ ಇಲ್ಲ. ನಿಮ್ಮ ಪರೀಕ್ಷೆಯಾದ ಹಾಗೆ ಎನ್ನಿ. (ವೈ ತಟ್ಟಿ ನಗುವನು. ಗೋಪಾಲನೂ ನಗುವನು.) ಏನು ಲಲಿತ, ನಿನ್ನ ಪರೀಕ್ಷೆ ಇನ್ನೂ ಬಾಕಿ ಇದೆಯೋ, ಅಲ್ಲ ಇಲ್ಲೀ ಮುಗಿಯಿತೇ?

ಲಲಿತ: ಅಪ್ಪನ ಕವಾಪೆ! ಅಪ್ಪಾ, ನಾನು ಹೋಗುತ್ತೇನಪ್ಪಾ. ಎರಡು ತಟ್ಟೆ ಶರಬತ್ತು ಮಾಡಿ ತಂಲೇ? (ಹೊರಡುವಳು).

ಶಂಕ: ಶರಬತ್ತಿಗಿಂತ ಹಾಲೇ ಒಳ್ಳೆದು. ಹಾಲನ್ನೇ ತಂದುಬಿಡು. (ತೆರಳುವಳು). ಗೋಪಾಲ್ (ಜೇಬಿನಿಂದ ನೋಟಿನ ಕಟ್ಟು ತೆಗೆದು) ಇಕೊಳ್ಳಿ. ಸಾವಿರ ರೂಪಾಯಿ ಇದೆ, ನಿಮ್ಮ ಸಾಲ, ಪರೀಕ್ಷೆ ಫೀಸು, ಖರ್ಚು ಎಲ್ಲಕ್ಕೂ ಆಯಿತು.

ಗೋಪಾಲ: ಸಾವಿರ! ಸಾವಿರ! ಏಕಿಷ್ಟು?

ಶಂಕ: ಇರಲಿ, ಇದು ನಿನ್ನದೇ ಹಣ. ನಿನ್ನಪ್ಪನದೇ ಹಣ. ನನ್ನದೇನೂ ಅಲ್ಲ ಗೋಪಾಲ್.

ಗೋಪಾಲ: ಯಾರದು! ನಮ್ಮಪ್ಪನದೇ? ನಮ್ಮಪ್ಪನದು?

ಶಂಕ: ಹೌದು, (ಆ ಕಡೆ ವೆಂಕಟ್ರಮಣಯ್ಯ ಬರುವುದನ್ನು ಕಂಡು) ನೋಡಿ, ಬಂದೇ ಬಂದರಲ್ಲ ನಿಮ್ಮಪ್ಪ. ಅವರನ್ನೇ ಕೇಳಿ.

ವೆಂಕಟ್ರಮಣಯ್ಯ: ಶುದ್ಧ ಅನ್ಯಾಯ, ಶುದ್ಧ ಅನ್ಯಾಯ! ಎಂಥ ವಿಶ್ವಾಸಘಾತಕ ಮಾಡಿದಿರಿ ಶಂಕರರಾಯರೇ! ವಕೀಲರ ಗುಣವೇ ಹೀಗೆ! ಆಚೆ ಈಚೆ ಕೈಯೊಡ್ಡುವುದು. ಏನನ್ಯಾಯ! ಇಬ್ಬರೂ ಹೊಂಡಕ್ಕೆ! (ಲಲಿತ ಗಲಿಬಿಲಿಯಿಂದ ಓಡಿಬರುವಳು. ಗೋಪಾಲ ಅವಳೆಡೆಗೆ ನಡಿಯುವನು.)

ಶಂಕ: ಬನ್ನಿ ವೆಂಕಟ್ರಮಣಯ್ಯನವರೇ ಬನ್ನಿ! ಏನೂ ಅನ್ಯಾಯವಾಗಿಲ್ಲ! ನಿಮ್ಮ ಮಗ ನನ್ನ ಅಳಿಯ; ನನ್ನ ಮಗಳು ನಿಮ್ಮ ಸೊಸೆ. ಇಷ್ಟೆ! (ಲಲಿತ ಗೋಪಾಲನ ಕೈಹಿಡಿದುಕೊಳ್ಳುವಳು)

ವೆಂಕ: (ಸಂತೋಷದಿಂದ) ಯಾರ, ಯಾರ ಸೊಸೆ, ನಿಮ್ಮ ಮಗಳು? ನನ್ನ ಸೊಸೆ? ನನ್ನ ಸೊಸೆ? ಎಲ್ಲಿ, ಎಲ್ಲಿ ಗೋಪಾಲ? ಗೋಪಾಲ ಎಲ್ಲಿದ್ದಾನೆ? (ಅವರಿಬ್ಬರೂ ಒಳಗೆ ಸರಿಯುವರು. ಆ ಕಡೆ ಧಾವಿಸುವರು. ಅವರ ಹಿಂದೆಯೇ ಶಂಕರರಾಯರೂ ಹೋಗುವರು.)

ಶಂಕ: ಹೌದು ವೆಂಕಟ್ರಮಣಯ್ಯನವರೇ, ಹೌದು. (ತೆರೆ).

ಸಂಪೂರ್ಣ.

■■■■■■■■■

# ವಿದ್ಯಾರ್ಥಿಗಳಿಗೆ ಮಾತ್ರ...!

ಶಾಲೆ ಕಾಲೇಜುಗಳ ಹೊಸ ವರುಷ ಪ್ರಾರಂಭವಾಗಿದೆ. ನಿಮ್ಮ ಮಕ್ಕಳ ವಿದ್ಯಾರ್ಜನೆಗೋಸ್ಕರ ಉಚಿತ ಯೋಜನೆಯನ್ನು ನೀವು ರೂಪಿಸಿರಬಹುದು. ನಿಮ್ಮ ಯೋಜನೆಯು ಸಂಪೂರ್ಣತೆಗೆ ಸಿಂಡಿಕೇಟ್ ಬೇಂಕೂ ನೆರವಾಗುವುದು.

(1) ವಿದ್ಯಾರ್ಥಿಗಳ ಸೇವಿಂಗ್ಸ್ ಬೇಂಕ್ ಖಾತೆಗೆ ಶೇಕಡಾ ಒಂದರಷ್ಟು ಬಡ್ಡಿಯನ್ನು ಹೆಚ್ಚಿಗೆ ಕೊಡಲಾಗುವುದು. (2) ವಿದ್ಯಾರ್ಥಿಗಳ ಯಸ್.ಬಿ ಖಾತೆಯಿಂದ ಎಷ್ಟು ಸಲವೂ ಹಣವನ್ನು ತೆಗೆಯಬಹುದು. (3) ನಮ್ಮ 112 ಶಾಖೆಗಳಲ್ಲಿ ಕಮಿಶನ್ ಇಲ್ಲದೆ ವಿದ್ಯಾರ್ಥಿಗಳ ಯಸ್. ಬಿ. ಖಾತೆಗೆ ರೂ. 500/- ವರೆಗೆ ಹಣವನ್ನು ಜಮೆ ಮಾಡಬಹುದು.

ವಿದ್ಯಾರ್ಥಿಗಳಿಗೆ ಮಾತ್ರ ಮೀಸಲಾಗಿರಿಸಿದ ಕೆಲವು ಸೌಕರ್ಯಗಳನ್ನು ಸದುಪಯೋಗಗೊಳಿಸಲು ಮರೆಯಬೇಡಿರಿ.

## ಸಿಂಡಿಕೇಟ್ ಬೇಂಕಿನ ವಿಶೇಷ ಅನುಕೂಲತೆಗಳು

**ಹೆಚ್ಚಿನ ವಿವರಗಳಿಗೆ ನಮ್ಮ ಯಾವುದೇ 112 ಶಾಖೆಗಳಲ್ಲಿ ವಿಚಾರಿಸಿರಿ.**

ಟಿ. ಎ. ಪೈ, ಬಿ. ಕೊಂ (ಬೊಂ),
ಎ.ಐ.ಐ.ಬಿ.ಎಫ್.ಆರ್.ಇ.ಎಸ್.,(ಲಂಡನ್),
ಜನರಲ್ ಮೆನೇಜರ್.

ಡಾ| ಟಿ. ಮಾಧವ ಪೈ,
ಎಂ. ಬಿ., ಬಿ. ಎಸ್.,
ಮೆನೇಜಿಂಗ್ ಡೈರೆಕ್ಟರ್.

**The Canara Industrial & Banking Syndicate Ltd., Udipi**



Edited, Printed & Published by K. V. Shenoy
at The Prabhat Printers, Ltd., Mangalore.